ಶಾರದಾ ಗ್ರಂಥಮಾಲೆ.

# ಇಪ್ಪತ್ತನೆಯ ಶತಮಾನದ ಅಳಿಯ.



ಬರೆದವರು:—ಆರ್. ಕಲ್ಯಾಣಮ್ಮ

ಸಂಪಾದಕಿ, 'ಸರಸ್ವತಿ', ಬೆಂಗಳೂರು ಸಿಟಿ.



ಪ್ರಥಮ ಮುದ್ರಣ ೧೦೦೦ ಕಾಪಿಗಳು.



ಬೆಲೆ 0-2-0 ಅಂಚೆವೆಚ್ಚ ಬೇರೆ.

1929

## ಸಮರ್ಪಣೆ.

ದೇಶದ ಅಭ್ಯುದಯ ಸೂತ್ರವನ್ನೂ, ಸುಧಾರಣಾ ಸೂತ್ರವನ್ನೂ ಕೈಲಿ ಹಿಡಿದ, ವಿದ್ಯಾವಿಭೂಷಿತರಾದ ಮಾನಿನೀ ಮಾನರಕ್ಷಕರಾದ, ವರದಕ್ಷಿಣಾ ಭೂತವನ್ನು ತೊಲಗಿಸಲು ಸಮರ್ಥರಾದ ಇಪ್ಪತ್ತನೆಯ ಶತಮಾನದ ಅಳಿಯಂದಿರಿಗೆ ಈ ಚಿಕ್ಕ ಗ್ರಂಥವು ಗ್ರಂಥಕರ್ತ್ರಿಯಿಂದ ಸಮರ್ಪಿಸಲ್ಪಟ್ಟಿದೆ.

# ಮುನ್ನುಡಿ.

—:o:—.

ಈ ಸಣ್ಣ ರೂಪಕವು ತುಮಕೂರಿನ ಹೈಸ್ಕೂಲಿನಿಂದ ಪ್ರಕಟವಾಗುತ್ತಲಿರುವ "School Folk" ಎಂಬ ಮಾಸಪತ್ರಿಕೆಯಲ್ಲಿ ಈಗ ೫ ವರ್ಷಗಳ ಹಿಂದೆ ಪ್ರಕಟವಾಗಿದ್ದಿತು ಆಗ ಇದು ಪುಸ್ತಕಾಕಾರದಲ್ಲಿ ಪುನರ್ಮುದ್ರಣವಾಗುವುದೆಂದು ನಾನು ಭಾವಿಸಿರಲಿಲ್ಲ. ಆದರೆ ಸಾಹಿತ್ಯಾಭಿಮಾನಿಗಳಾದ ನನ್ನ ಮಿತ್ರರು ಕೆಲವರು ಇದನ್ನು ಪುಸ್ತಕರೂಪವಾಗಿ ಪ್ರಕಟಿಸಬೇಕೆಂದು ಅಪೇಕ್ಷಿಸಿದ್ದರಿಂದ ಕಳೆದ ವರ್ಷದ ಸರಸ್ವತಿಯಲ್ಲಿ ಪುನಃ ಮುದ್ರಿಸಲಾಯಿತು. ಅದೇ ಈಗ ಪುಸ್ತಕಾಕಾರದಿಂದ ತಮ್ಮ ಸೇವೆಗೆ ಬಂದಿರುವುದು. ಹಿಂದೂ ಸಮಾಜದ ಜೀವಜೀವಾಳವನ್ನು ಶೋಷಿಸುತ್ತಿರುವ ದುಷ್ಟಪದ್ಧತಿಗಳಲ್ಲಿ ಅತಿ ಮುಖ್ಯವಾದ "ವರದಕ್ಷಿಣೆ" ಯ ಅತ್ಯಾಚಾರವನ್ನು ಕನ್ನಡಿಗರ ಮುಂದಿಡುವುದೇ ಈ ರೂಪಕದ ಮುಖ್ಯ ಉದ್ದೇಶ. ಪವಿತ್ರ ಆರ್ಯಾವರ್ತದ ಜನಾಂಗದ ಭಾವೀ ಮಾತೃಸ್ವರೂಪಿಣಿಯರ ಅಂತರ್ಜೀವನವು ಇಂತಹ ಅನೇಕ ಅನಿಷ್ಟ ಪದ್ಧತಿಗಳ ಪರಿಣಾಮದಿಂದ ದಿನೇದಿನೇ ಕುಗ್ಗುವುದೆನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಮೇಲ್ಕಂಡ ಉದ್ದೇಶ ವಿನಾ ಇದಕ್ಕೆ ಮತ್ತಾವ ಸಾಹಿತ್ಯಗೌರವವನ್ನೂ ಲೇಖಕಿಯು ಅಪೇಕ್ಷಿಸುವುದಿಲ್ಲ.

ನನ್ನ ಹಿಂದಿನ ಗ್ರಂಥಗಳನ್ನಾದರಿಸಿದ ಸೋದರ-ಸೋದರಿಯರು ಈ ಸಣ್ಣ ಗ್ರಂಥವನ್ನೂ ಆದರಿಸುವರೆಂದು ನಂಬುವೆನು.

ಸರಸ್ವತೀ ಕಾರ್ಯಾಲಯ
ಚಾಮರಾಜಪೇಟೆ,
ಬೆಂಗಳೂರು ಸಿಟಿ.
೧೦—೫—೧೯೨೯.

ಇತಿ
**ಆರ್. ಕಲ್ಯಾಣಮ್ಮ.**

# ಇಪ್ಪತ್ತನೆಯ ಶತಮಾನದ ಅಳಿಯ.

---

## ಪಾ ತ್ರ ಗ ಳು .

ರಾಮು—ಕಿಟ್ಟುವಿನ ಸ್ನೇಹಿತ.

ಕಿಟ್ಟು—ಒಬ್ಬ ತಹಶೀಲ್ದಾರನ ಮಗ.

ಕೈಲಾಸಯ್ಯರ್—ಕಿಟ್ಟುವಿನ ತಂದೆ (ತಂಜಾವೂರಿನ ತಹಶೀಲ್ದಾರ್).

ಕಾಮಾಕ್ಷಿ—ಕಿಟ್ಟುವಿನ ತಾಯಿ.

ಸೀತಾಲಕ್ಷ್ಮಿ—ಕಿಟ್ಟುವಿಗೆ ಗೊತ್ತುಮಾಡಿರುವ ಹೆಣ್ಣು.

ಮಹದೇವಯ್ಯರ್-ಸೀತಾಲಕ್ಷ್ಮಿಯ ತಂದೆ(ಮದ್ದಗಿರಿಯಲ್ಲಿ ಗುಮಾಸ್ತೆ)

ಜಾನಕಿ—ಸೀತಾಲಕ್ಷ್ಮಿಯ ತಾಯಿ.

# ಇಪ್ಪತ್ತನೆಯ ಶತಮಾನದ ಅಳಿಯ.

## ಒಂದನೆಯ ಅಂಕ. (೧ನೆಯ ದೃಶ್ಯ)

—:o:—

ಮಹದೇವಯ್ಯನ್ ಮತ್ತು ಜಾನಕಿಯ ಪ್ರವೇಶ; ಸ್ಥಳ—ಮನೆಯ ಮುಂದಿನ ರ.

ಮಹದೇ—

ಏನೇ, ಅಡಿಗೆಯಾಯಿತೇ?

ಜಾನಕಿ--

ಅಡಿಗೆಯೇನೋ ಆದಹಾಗೆಯೇ; ಜಾಗ್ರತೆ ದೇವರಪೂಜೆಮಾಡಿ ಭೋಜನಕ್ಕೇಳಿ. (ತನ್ನಲ್ಲಿ ತಾನೇ) ಹೆಣ್ಣುಮಕ್ಕಳನ್ನು ಪಡೆದವರೇ ನಿರ್ಭಾಗ್ಯರು. ಹುಟ್ಟುವಾಗ ಚಿಂತೆ, ಹುಟ್ಟಿದಮೇಲೆ ಮದುವೆಯಾಗಬೇಕಲ್ಲಾ ಎನ್ನುವ ಚಿಂತೆ. ವರದಕ್ಷಿಣೆ ಕೊಡುವ ಗಂಡಾಂತರವಂತೂ ತಿಳಿದೇ ಇದೆಯಲ್ಲಾ! ಇದಾದಮೇಲೆ ಅವರು ಸುಖವಾಗಿ ಬಾಳಿ ಬದುಕಬೇಕೆನ್ನುವ ಚಿಂತೆ. ಸೀತಾಲಕ್ಷ್ಮಿಯೊಬ್ಬ ಮಗಳಾದರೂ ಇವಳಿಗೆ ೧೪ ವರ್ಷವಾಗುತ್ತ ಬಂದಿರುವುದರಿಂದ ಇವಳಿಗೆ ಮದುವೆಮಾಡುವ ಚಿಂತೆಯಲ್ಲದೆ, ಈಚಿಗೆ ನಮ್ಮಿಬ್ಬರಿಗೂ ಬೇರೇ ಯೋಚನೆಯೇನಾದರೂ ಇದೆಯೇ? ನಾನಾದರೆ ಹೆಣ್ಣು ಹೆಂಗಸಾದ್ದರಿಂದ ಬಾಯಿಬಿಟ್ಟಾದರೂ ಹೇಳುತ್ತೇನೆ. ಪಾಪ! ನಮ್ಮ ಯಜಮಾನರು ಯಾವುದಕ್ಕೂ ಬಾಯಿಬಿಡುವುದಿಲ್ಲ. ನನಗೇ ಸಹಿಸುವುದು ಕಷ್ಟವಾಗಿರುವಾಗ, ಪಾಪ! ಅವರೇನು ಮಾಡಾರು? ಊಟವಾದ ಅನಂತರ ನಮ್ಮ ಯಜಮಾನರೊಡನೆ ಈ ವಿಷಯವಾಗಿ ಮಾತನಾಡಬೇಕು.

ಮಹದೇ—

ಏನೇ, ಗೊಣಗೊಣವೆಂದು ನಿನಗೆ ನೀನೇ ಮಾತನಾಡಿಕೊಳ್ಳುವೆ! ನನಗೂ ಸ್ವಲ್ಪ ಹೇಳು.

ಜಾನಕಿ--

ಏಳಿ, ಊಟವಾದನಂತರ ಎಷ್ಟು ಬೇಕಾದರೂ ಹೇಳುತ್ತೇನೆ ನಾನೇನೂ ಎಲ್ಲಿಯೂ ಹೋಗುವುದಿಲ್ಲ, ನನ್ನ ಮಾತೂ ಎಲ್ಲಿಯೂ ಹೋಗುವುದಿಲ್ಲ; ಬೇಕಾದಷ್ಟು ಹೇಳುತ್ತೇನೆ.

ಮಹದೇ-

ಹಾಗೆಯೇ ಆಗಲಿ, ಸೀತಾಲಕ್ಷ್ಮಿ ಎಲ್ಲಿ ಹೋದಳು ?

ಜಾನಕಿ--

ದೇವರಪೂಜೆಗೆ ಸಾಮಗ್ರಿಗಳನ್ನು ಅಣಿಮಾಡುತ್ತಿದಾಳೆ, ಏಳಿ.

ಮಹದೇ-

ಇದೋ ಎದ್ದೆ. ಸ್ನಾನಮಾಡಿ ಬೇಗ ದೇವರಪೂಜೆ, ಊಟ ಮೊದಲಾದವು ಗಳನ್ನು ಪೂರೈಸಿಕೊಂಡು ಬರುತ್ತೇನೆ.

ಸ್ನಾನಕ್ಕೆ ಹೊರಟುಹೋಗುವನು. ಜಾನಕಿಯೂ ಹೊರಟುಹೋಗುವಳು. ಸ್ವಲ್ಪಹೊತ್ತಾದ ಅನಂತರ ಮಹದೇವಯ್ಯರು ಊಟಮಾಡಿ ಕೇಗುತ್ತಾ ಬರುವನು. ಜಾನಕಿಯು ಕೈಯಲ್ಲಿ ತಾಂಬೂಲದ ತಟ್ಟೆಯನ್ನು ಹಿಡಿದುಕೊಂಡು ಬರುವಳು. ಇಬ್ಬರೂ ಹಜಾರದಲ್ಲಿದ್ದ ಚಾಪೆಯಮೇಲೆ ಕುಳಿತುಕೊಳ್ಳುವರು

ಜಾನಕಿ--

[ಮಗಳನ್ನು ಕರೆದು] ಸೀತಾಲಕ್ಷ್ಮೀ, ಬೇಗ ಎಲೆಗೋಮಪಾಡಿಕೊಂಡು ಸ್ಕೂಲಿಗೆ ಹೋಗು. ಬರುವಾಗ ಅಡಿಗೆಮನೆ ಬಾಗಿಲುಗಳನ್ನು ಹಾಕಿಕೊಂಡು ಬಾ; ಹಾಲು ತೆಗೆದು ಮುಚ್ಚಿ ಮಾಡದಲ್ಲಿಟ್ಟು ಬಾ.

[ಸೀತಾಲಕ್ಷ್ಮಿಯು ಪ್ರವೇಶಿಸುವಳು]

ಸೀತಾಲ--

ಅಮ್ಮಾ, ನೀನು ಹೇಳಿದ ಕೆಲಸಗಳನ್ನೆಲ್ಲ ಮಾಡಿದೇನೆ; ಸಾವಿತ್ರಿಯು ಬಂದಿರುವಳು, ಸ್ಕೂಲಿಗೆ ಹೋಗಿಬರುತ್ತೇನೆ; ಬರಲೇನಮ್ಮ?

ಜಾನಕಿ--

ಹೋಗಿಬಾ ಮಗೂ; [ಸೀತಾಲಕ್ಷ್ಮಿಯು ಹೊರಟುಹೋಗುವಳು. ಜಾನ

ಕಿಯು ಅವಳು ಹೋಗುವುದನ್ನೇ ನೋಡುತ್ತಿದ್ದು ಪತಿಯನ್ನು ಕುರಿತು]
ಏನೂಂದ್ರೇ! ನಮ್ಮ ಸೀತಾಲಕ್ಷ್ಮಿಯ ಮುದ್ದುಮುಖವನ್ನೂ, ಅವಳ ವಿನಯಗಾಂಭೀರ್ಯವನ್ನೂ ನೋಡಿದಾಗಲೆಲ್ಲಾ ಇವಳನ್ನು ತಕ್ಕ ಸ್ಥಳದಲ್ಲಿ ಯೋಗ್ಯನಾದವನಿಗೆ—ನಮ್ಮ ಮಗುವಿನ ಗುಣವನ್ನರಿತು ನಡೆಯುವಂತಹ ಯೋಗ್ಯನಿಗೆ ಕೊಟ್ಟು ಮದುವೆಮಾಡಿ ಕಣ್ಣಾರಕಂಡು ಸಂತೋಷಪಡಬೇಕಲ್ಲಾ ಎನ್ನುವುದೊಂದಲ್ಲದೆ, ನನಗೆ ಮತ್ತಾವ ಚಿಂತೆಯೂ ಇಲ್ಲ.

ಮಹದೇ–

ಎಂತಹ ಕಡೆ ಕೊಡಬೇಕೆನ್ನುವುದು, ನಿನ್ನಿಷ್ಟ ಹೇಳು.

ಜಾನಕಿ--

ಮಗುವನ್ನು ಸುಖವಾಗಿಟ್ಟುಕೊಳ್ಳತಕ್ಕವನೂ, ವಿದ್ಯಾವಂತನೂ, ಇನ್ನೂ ಚಿಕ್ಕವನೂ, ತುಂಬಿದ ಸಂಸಾರಿಯಾಗಿಯೂ ಇರುವ ಕಡೆ ಕೊಟ್ಟರೆ ಮಗು ಕಣ್ಣು ಹಿಸಿಕಿಕೊಳ್ಳದೆ ಸುಖವಾಗಿರುವದು; ಅದನ್ನು ಕಂಡು ನಾವೂ ಸಂತೋಷಪಡಬಹುದು.

ಮಹದೇ-

ಸರಿಸರಿ, ನೀನೇನೋ ಸರಪೋಣಿಸಿದಂತೆ ಉದ್ದವಾಗಿ ಹೇಳಿಬಿಟ್ಟೆ; ನಾವೇನು ಕುಬೇರನ ಮಕ್ಕಳೆಂದೆಣಿಸಿದೆಯೋ? ಅಥವಾ ಲಕ್ಷ್ಮೀದೇವಿಯು ಹೋಗುವಾಗ ನಿಮ್ಮ ಮನೆ ಹಿತ್ತಲಕಡೆಯಿಂದಲೇ ಹೋದಳೇನೋ! ಇಷ್ಟು ಇರುವವರು ದೊರೆಯಬೇಕಾಗಿದ್ದರೆ--ಜಾನಕೀ, ನಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗಲ್ಲಾ, ತಿಳಿಯಿತೋ?

ಜಾನಕಿ--

ನಾವು ದರಿದ್ರರಾದರೆ ಅವಳ ಹಣೆಯಬರಹವು ಏಕೆ ಚೆನ್ನಾಗಿರಬಾರದು?

ಮಹದೇ-

ಹಣೆಯ ಬರಹವನ್ನು ತಿಳಿಯುವ ಶಕ್ತಿಯು ನನಗೂ ನಿನಗೂ ಇದರೆ ನಾವೇಕೆ ಹೀಗಿರುತಿದ್ದೆವು? ಹೇಗೇಗೋ ಇರುತಿದ್ದೆವು. ಆದಿರಲಿ, ನಾನೆರಡು

ಮೂರು ವರಗಳನ್ನು ಆರಿಸಿದ್ದೇನೆ. ಅದರಲ್ಲೊಂದು-ತಂಜಾವೂರ್ ತಹಸೀಲ್ದಾರರ ಮಗ; ಅವನು ಮದರಾಸ್ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಮೊದಲನೆಯವರ್ಷದ ಬಿ.ಎ. ತರಗತಿಯಲ್ಲಿರುವನು; ಆದರೆ ಆ ತಹಸೀಲ್ದಾರನು ಬಹಳ ಸಿಡುಕನಂತೆ. ಕಾಸೂ ಎಂದರೆ ಅವನಿಗೆ ಅನ್ನ-ನೀರೊಂದೂ ಬೇಡವಂತೆ. ಎರಡನೆಯವನು—ಕೊಯಮುತ್ತೂರ್ ವ್ಯವಸಾಯ ಶಾಲೆ [Agricultural College] ಯಲ್ಲಿ ಓದುತ್ತಿದಾನೆ, ಅವನಿಗೆ ಹತ್ತೊಂಭತ್ತು ವರ್ಷ ವಯಸ್ಸು, ಆಸ್ತಿಪಾಸ್ತಿಗಳೇನೂ ಇಲ್ಲದಿದ್ದರೂ ವರನು ಯೋಗ್ಯನಾದವನು, ತಂದೆತಾಯಿಗಳು ಯೋಗ್ಯರು. ಮೂರನೆಯವನು—ಬೆಂಗಳೂರು ಸಂಸ್ಕೃತ ಪಾಠಶಾಲೆಯಲ್ಲಿ ಶಾಸ್ತ್ರಾಭ್ಯಾಸ ಮಾಡುತ್ತಿದ್ದಾನೆ. ಅವನ ತಂದೆತಾಯಿಗಳನ್ನು ನಾನು ಬಲ್ಲೆ; ಅವನಿಗೆ ೨೦ ವರ್ಷ; ಇವನೂ ಯೋಗ್ಯನೇ. ಇವುಗಳಲ್ಲಿ ಯಾವುದಾದರೊಂದು ಗೊತ್ತಾದರೆ ಮುಂದಿನ ಮಾಘಮಾಸದಲ್ಲಿ ಮದುವೆಮಾಡಬಹುದು. ಈ ವಿಷಯವಾಗಿ ಮೊನ್ನೆ ತಂಜಾವೂರಿಗೆ ಕಾಗದಬರೆದಿದ್ದೇನೆ, ಆದರೂ ತಹಸೀಲ್ದಾರನು ಬಡ ಗುಮಾಸ್ತನ ಮಗಳನ್ನು ತಂದುಕೊಳ್ಳುವನೆನ್ನುವ ನಂಬಿಕೆಯು ನನಗಿಲ್ಲ. ಆದರೆ ಆಸೆಯು ಕೆಟ್ಟದ್ದಲ್ಲವೆ?

ಜಾನಕಿ--

ಅವನಿಂದ ಉತ್ತರ ಬರುವವರೆಗೂ ನೋಡೋಣ, ನಮ್ಮ ಶಕ್ತಿಯಿದ್ದಷ್ಟು ಮಾಡಬಲ್ಲೆವೇ ಹೊರತು, ಇಲ್ಲದ್ದಕ್ಕೇನು ಮಾಡೋಣ?

ಮಹದೇ--

[ಏಳುತ್ತಾ] ನಾನು ಕಛೇರಿಗೆ ಹೋಗಬೇಕು; ಹತ್ತೂ ಮುಕ್ಕಾಲು ಘಂಟೆಯ ಸಮಯ; ಅಂಚೆಯವನಿನ್ನೂ ಬರಲಿಲ್ಲವೇನೋ! [ಉಡುಪುಗಳನ್ನು ಧರಿಸಿಕೊಂಡು ಹೊರಟುಹೋಗುವನು; ಜಾನಕಮ್ಮನು ತಾಂಬೂಲದ ತಟ್ಟೆಯನ್ನು ತೆಗೆದುಕೊಂಡು ಮತ್ತೊಂದು ಕಡೆ ಹೊರಟುಹೋಗುವಳು.]

[ತೆರೆ ಬೀಳುವುದು.]

ಕಾಮಾ–

ಅದಿರಲಿ, ನೀವೇತಕ್ಕೆ ಕರೆದಿರಿ?

ಕೈಲಾಸ–

ಸಾವಕಾಶವಾಗಿ ಕೇಳಲು ವಿರಾಮವಿದೆಯೋ, ಇಲ್ಲ ಸಂಕ್ಷೇಪವಾಗಿ ಹೇಳಬೇಕೋ?

ಕಾಮಾ –

ಹೇಗೆ ಬೇಕೋ ಹಾಗೆ ಹೇಳಿ; ವ್ಯರ್ಥವಾಗಿ ಕಾಲಹರಣ ಮಾಡುವುದರಲ್ಲಿ ನಿಮ್ಮನ್ನು ಬಿಟ್ಟರೆ ಮತ್ಯಾರೂ ಇಲ್ಲ. ಬೇಗಹೇಳಿ, ಇಲ್ಲದಿದ್ದರೆ ನಾನಿದೋ ಹೊರಟೆ (ಹೊರಡಲುದ್ಯುಕ್ತಳಾಗುವಳು).

ಕೈಲಾಸ–

ಬೇಡ ಬೇಡ, ಹೇಳುತ್ತೇನೆ; ನೀನು ಕೆಲಸ ಮಾಡಲಾರೆನೆಂದು ಸದಾ ಗೊಣಗುಟ್ಟುವೆಯಲ್ಲಾ, ನಿನ್ನ ಸಹಾಯಕ್ಕಾಗಿ ಯಾರನ್ನಾದರೂ ಏರ್ಪಾಡು ಮಾಡಿದರೆ ಒಳ್ಳೆಯದಲ್ಲವೇ? ನಮ್ಮ ಕಿಟ್ಟುವಿಗೆ ಹೆಣ್ಣು ಕೊಡುವೆನೆಂದು ಮುದ್ದುಗಿರಿಯಿಂದ ಕಾಗದ ಬಂದಿದೆ, ಹುಡುಗಿಗೆ ಹತ್ತು ವರ್ಷ, ಸುರೂಪಿ. ಒಬ್ಬಳೇಮಗಳು ಅದರವಿಷಯ ಯೋಚಿಸುವುದಕ್ಕಾಗಿಯೇ ನಿನ್ನನ್ನು ಕರೆದೆ

ಕಾಮಾ –

ನಮಗೆ ಒಬ್ಬನೇ ಮಗ, ಅವನ ಯೋಗ್ಯತೆಗೂ ನಮ್ಮ ಯೋಗ್ಯತೆಗೂ ತಕ್ಕಂತೆ ಮದುವೆ ಮಾಡುವ ಹಾಗಿದ್ದರೇಕೆ ಬೇಡವೆನ್ನಬೇಕು? ಕಿಟ್ಟುವಿನ ಇಷ್ಟದಂತೆ ಅವನೇ ಉತ್ತರ ಬರೆಯಲಿ. ನೀವು ಕಿಟ್ಟುವಿನಿಂದ ಕಾಗದ ಬರುವುದೆಂದೂ, ಅವನಿಷ್ಟದಂತೆ ಮಾಡುವ ಪಕ್ಷದಲ್ಲಿ ನಮ್ಮ ಆಕ್ಷೇಪಣೆಯೇನೂ ಇಲ್ಲವೆಂದೂ ಬರೆದುಬಿಡಿ.

ಕೈಲಾಸ–

ಹಾಗೆಯೇ ಮಾಡುವದೊಳ್ಳೆಯದು (ಕಿಟ್ಟೋ–ಕಿಟ್ಟೋ ಎಂದು ಕರೆಯುವನು) (ಕ್ರಾಪಿನತಲೆ, ಕನ್ನಡಕ, ಬಿಳೀ ಮಲ್ಲು ದಟ್ಟಿ ಸುತ್ತಿದ ಪಂಚೆ, ಷರಟು ಕಾಲರುಗಳನ್ನು ಧರಿಸಿದ ಕಿಟ್ಟುವಿನ ಪ್ರವೇಶ).

ಕಿಟ್ಟೊ—

(ಪ್ರವೇಶಿಸಿ) ಅಪ್ಪಾ ! ನನ್ನನ್ನೇಕೆ ಕರೆದೆ? ಸ್ಟಡಿ (study) ಮಾಡುತ್ತಿರುವಾಗ ಸುಮ್ಮನೆ ತೊಂದರೆ ಕೊಡಬೇಡವೆಂದು ಥೌಸಂಡ್ ಟೈಂಸ್ (thousand times) ಹೇಳಿದರೂ ನಿಮಗೆ ಸ್ವಲ್ಪಕೂಡ ಸೆನ್ಸ್(sense) ಇಲ್ಲ.

ಶಾಮಾ—

ನಿನ್ನ ಕಾರ್ಯವನ್ನುದ್ದೇಶಿಸಿಯೇ ನಿನ್ನನ್ನು ಕರೆದರು ; ಇದಕ್ಕೇಕಿಷ್ಟು ಸಿಟ್ಟು, ಮಗು ?

ಕಿಟ್ಟು —

ನಾನ್ಸೆನ್ಸ್ (nonsense)! ನನ್ನ ಕೆಲಸವೊ! ಆಯಿತು; ಅಂತ ಕೆಲಸವೇನಮ್ಮಾ, ಬೇಗ ಹೇಳಿ; ನನ್ನ ಫ್ರೆಂಡ್ಸ್ (friends) ವೆಯ್ಟ್ (wait) ಮಾಡುತ್ತಿದಾರೆ, ನಾನು ಹೋಗಬೇಕು.

ಕೈಲಾಸ -

ಇದಕ್ಕೇ ಕಿಟ್ಟು, ನಿನ್ನನ್ನು ಕರೆದದ್ದು. (ಮಹದೇವಯ್ಯರ ಕಾಗದನ್ನು ಕೊಟ್ಟು) ಇದನ್ನು ಪೂರ್ತಿಯಾಗಿ ಓದಿ ನಿನ್ನ ಇಷ್ಟದಂತೆಯೇ ಅವರಿಗೊಂದು ಕಾಗದವನ್ನು ಬರಿ; ಸಾಧ್ಯವಾದರೆ ಈ ವೆಕೇಷನ್ (vacation) ನಲ್ಲೇ ಮ್ಯಾರೇಜ್ (marriage) ಮಾಡೋಣ.

ಕಿಟ್ಟು —

(ಕಾಗದವನ್ನೋದಿ) ಅಪ್ಪಾ ! ನನ್ನ ಮನಸ್ಸಿನಲ್ಲಿ ಸರ್ಟನ್ ಪ್ರೊಪೋಸಲ್ಸ್ (certain proposals) ಇವೆ. ಅದಕ್ಕೊಪ್ಪುವಹಾಗಿದ್ದರೆ ನೋಡೋಣ, ಇಲ್ಲದಿದ್ದರೆ ಬೇಡ.

ಕೈಲಾಸ—

ಎಲ್ಲವೂ ನಿನ್ನ ಛಾಯ್ಸ್ (choice) ಗೇ ಬಿಟ್ಟಿದೆ. ನಿನ್ನಿಷ್ಟವನ್ನು ವಿವರವಾಗಿ ಬರೆದು ಪೋಸ್ಟ್ ಮಾಡು ; ನನ್ನ ಮಗನಿಂದ ಕಾಗದ ಬರುವುದೆಂದೂ, ಅವನಿಷ್ಟದಂತೆ ನಡೆಯುವುದಾದರೆ ನನ್ನ ಆಕ್ಷೇಪಣೆ ಇಲ್ಲವೆಂದೂ ನಾನು ಬರೆಯುತ್ತೇನೆ.

ಕಿಟ್ಟು —

ಹಾಗೆಯೇ ಆಗಲಿ. ( ಹೋಗುವನು)

ಕಾಮಾ-

ನಮ್ಮ ಜವಾಬ್ದಾರಿ ಮುಗಿಯಿತು. ಕಿಟ್ಟುವೇನು ಪುಟ್ಟವನೇ, ಮಗುವೇ! ನಮ್ಮ ಮನ ಬಂದದ್ದನ್ನು ಮಾಡಿ ಅವರಿಗಿಷ್ಟವಿಲ್ಲದೆ ಕಚ್ಚಾಟದಲ್ಲಿ ಕಾಲ ಕಳೆಯುವುದಕ್ಕಿಂತ ಅವರಿಷ್ಟದಂತೆ ಹೋಗುವುದೇ ಒಳ್ಳೆಯದು.

ಕೈಲಾಸ-

ಹೌದು; ಅದೇನೊ ನಿಜ. ನಮ್ಮ ಕಾಲದಲ್ಲಿ ಹೀಗೆಯೇ ಇದ್ದಿದ್ದರೆ ನಿನ್ನ ಕೈಗೆ ಸಿಕ್ಕಿ ನಾನಿಷ್ಟು ಅವಸ್ಥೆ ಪಡುತ್ತಿರಲಿಲ್ಲ; ಈಗಿನ ಕಾಲದವರೆಷ್ಟೋ ಪುಣ್ಯವಂತರು!

ಕಾಮಾ-

(ಸಿಟ್ಟಿನಿಂದ) ಏನಂದ್ರೀ? ಎಲ್ಲಿ, ಇನ್ನೊಂದು ಸಲ ಹೇಳಿ, ನೋಡೋಣ.

ಕೈಲಾಸ-!

ಏನೋ ಕೆಲಸಗಳು ಮಾಡಬೇಕೆಂದು ಆಗಲೇ ಹೇಳಿದೆಯಲ್ಲಾ, ಬೇಗ ಹೋಗು.

ಕಾಮಾ -

(ದುರದುರನೆ ನೋಡುತ್ತ ಹೋಗುವಳು]

(ಕೈಲಾಸಯ್ಯರ್ ಪುನಃ ಪತ್ರಿಕೆಯನ್ನೋದುತ್ತ ಕುಳಿತುಕೊಳ್ಳುವನು.)

---

## ಮೂರನೆಯ ಸೀನ್.

---

ಅಂಚೆಯ ಕಛೇರಿಗೆ ಹೋಗುವ ಮಾರ್ಗ. ಕಿಟ್ಟು, ರಾಮು—ಇವರ ಪ್ರವೇಶ.

ರಾಮು—

ಕಿಟ್ಟು, ನಾನೊಂದು ವರ್ತಮಾನ ಕೇಳಿದೆ, ನಿಜವೇನು ? ನೀನು ಪಕ್ಕಾ ಕಳ್ಳ, ಯಾವುದನ್ನು ಹೇಳುವುದಿಲ್ಲ.

ಕಿಟ್ಟು—

ಯಾವುದನ್ನು ನಿನಗೆ ಹೇಳಲಿಲ್ಲ? ಅದೇನು ವರ್ತಮಾನ ನೀನು ಕೇಳಿದೆ About my failure ?

ರಾಮು--

ಇನ್ನೂ ರಿಜಲ್ಟೇ (Result) ಬಂದಿಲ್ಲ. ನಿನಗೆ ಮದುವೆಯಂತೆ, Is it true ?

ಕಿಟ್ಟು—

(ನಗುತ್ತಾ) Oh! My God, ನಿನಗೆ wireless telegraph ಎಲ್ಲಿಂದ ಬಂತು ?

ರಾಮು--

Mr. Saminathan told me so.

ಕಿಟ್ಟು—

Certainly he is a big fool to tell you this.

ರಾಮು—

Is it true or false ? Do you hide it from me ?

ಕಿಟ್ಟು—

ಯಾವನೋ ಒಬ್ಬ poor clerk, ಅವನ ಮಗಳನ್ನು ಕೊಡುತ್ತಾನೆಂದು ಕಾಗದಬಂದಿದೆಯೆಂದೂ, ನನ್ನ choiceಗೆ ಬಿಟ್ಟಿರುವುದಾಗಿಯೂ, ನನ್ನಿಷ್ಟವನ್ನು ಬರೆಯುವಂತೆಯೂ, my father told me yesterday. ನನ್ನಿಷ್ಟದಂತೆ ಕೆಲವು proposal ಬರದಿದ್ದೇನೆ. If he agrees,......

ರಾಮು—

What are they ? ನಾನು ಕೇಳಬಹುದೋ ?

ಕಿಟ್ಟು—

(ಕಾಗದವನ್ನು ಕೈಗೆ ತೆಗೆದುಕೊಂಡು) By all means you may hear. (ಎಂದು ಹೇಳಿ ಲಕೋಟೆಯಿಂದ ಕಾಗದವನ್ನು ತೆಗೆದು ಓದುವನು.)

ತಂಜಾವೂರ್- Big Street
ಮೇ 19--1926.

Dear Sir,

ನೀವು ನಮ್ಮ ತಂದೆಗೆ ಬರೆದ ಕಾಗದವನ್ನು ಓದಿದೆನು. ಬಹಳ ಸಂತೋಷ—ನೀವು ನಿಮ್ಮ ಕಾಗದದಲ್ಲಿ ಸೂಚಿಸಿರುವಂತೆ ನಾನು ಸಂಕೋಚವಿಲ್ಲದಂತೆ ಮನಸ್ಸಿನಲ್ಲಿದ್ದಂತೆಯೇ ಬರೆಯುವೆನು. ನೀವು ಹೇಳುವಂತೆ-plain speaking will save future worry.

ಈ ಕೆಳಗೆ ಸೂಚಿಸಿರುವ ಕಂಡಿಷನ್‌ಗಳಿಗೆ ನೀವು ಒಪ್ಪುವ ಪಕ್ಷದಲ್ಲಿ ನಿಮ್ಮ ಮಗಳನ್ನು ಮದುವೆಯಾಗಲು ಅಭ್ಯಂತರವಿಲ್ಲ.

೧ ಹೋಬರ್ಟ್ ಮೋಟಾರ್ ಬೈಕ್ (Hobert Motar Bike of Paters) ಇದು ಇರತಕ್ಕ ಮೋಟರ್ ಸೈಕಲುಗಳಲ್ಲೆಲ್ಲ ಅತ್ಯುತ್ತಮವಾದದ್ದು—ನಿಮ್ಮ ಮಗಳು ನನ್ನೊಡನೆ ವಿಹರಿಸಬೇಕೆನ್ನುವ ಇಷ್ಟವಿದ್ದರೆ, ಒಂದು ಸೈಡ್ ಕಾರನ್ನೂ (side car) ಹಾಕಿಸಿಕೊಡಬಹುದು; ಪೆಟ್ರೋಲ್ ಹೆಚ್ಚಾಗಿ ಖರ್ಚಾಗುವ ವಿಷಯಕ್ಕೆ ನನ್ನ ಆಕ್ಷೇಪಣೆಯಿಲ್ಲ.

೨. ಕನಿಷ್ಟಪಕ್ಷಕ್ಕೆ ೧೫೦ ರೂ. ಕ್ರಯ ಬಾಳತಕ್ಕ ಸೊಗಸಾದ ರಿಸ್ಟ್ ವಾಚು (ಕೈಗಡಿಯಾರವು); ಮತ್ತು ಅದಕ್ಕೆ ತಕ್ಕ ೧೦೦ ರೂ. ಬೆಲೆ ಬಾಳುವ ಸರಪಣಿ.

೩. ಸಾಧಾರಣವಾಗಿ ಧರಿಸಲು ಒಂದು ಡಜ಼ನ್ ರೇಷ್ಮೆಯ ಉಡುಪುಗಳು (silk suits). ಇವುಗಳನ್ನು ನೀವು ಇಂಗ್ಲಿಷ್ ಕಾರ್ಖಾನೆಗಳಲ್ಲಾಗಲಿ, ಹಿಂದೂ ದರ್ಜಿ ಅಂಗಡಿಗಳಲ್ಲಾಗಲಿ ಹೊಲಿಸಬಹುದು—ಅದು ನಿಮ್ಮಿಷ್ಟ. ಸೂಟ್ ಒಂದಕ್ಕೆ ೫೦ ರೂಪಾಯಿಗಳಿದ್ದರೆ ಸಾಕು.

೪. ವಿಶೇಷ ದಿನಗಳು, ಟೀಪಾರ್ಟಿ, ವನವಿಹಾರ, ಸಂತೋಷಕೂಟ ಮೊದಲಾದ ದಿನಗಳಲ್ಲಿ ಧರಿಸಲು ಯೋಗ್ಯವಾದ, ಒಂದೊಂದು ಕನಿಷ್ಟಪಕ್ಷ ನೂರೈವತ್ತು ರೂಪಾಯಿ ಬೆಲೆಯುಳ್ಳ ಒಂದು ಡಜ಼ನ್ ಉಡುಪುಗಳನ್ನು

ನಿಮ್ಮ ಮಗಳ ಸಂತೋಷಕ್ಕೂ ನಿಮ್ಮ ಯೋಗ್ಯತೆಗೂ ತಕ್ಕಂತೆ ಇನ್ನೂ ಹೆಚ್ಚು ಬೆಲೆಯಲ್ಲಿ ಹೊಲಿಸಿದರೆ ನಾನು ಬೇಡವೆನ್ನುವದಿಲ್ಲ.

೫. ಸುಲೋಚನ—ನೂರು ರೂಪಾಯಿಗಳಿಗೆ ಕಡಿಮೆಯಿಲ್ಲದೆ ಇಂಗ್ಲೀಷರು ಧರಿಸುವಂಥದು ಆಗಿದ್ದರೆ ಸಾಕು—ಇದರ ಬೆಲೆಯನ್ನು ಕಳುಹಿಸಿದರೆ ನಿಮಗೆ ತೊಂದರೆ ಕೊಡದೆ ನಾನೇ ಕೊಂಡುಕೊಳ್ಳುತ್ತೇನೆ.

೬. ಫೌಂಟೆನ್ ಪೇನಾಗಳು ೩—ಒಂದೊಂದು ೫೦ ರೂಪಾಯಿಗಳೊಳಗಿದ್ದರೆ ಸಾಕು.

೭. ಸೋಪುಗಳು, ವಾಸನಾತೈಲಗಳು, ಸೆಂಟುಗಳು, ಬ್ರಷ್ ಮೊದಲಾದವುಗಳು ಇವುಗಳನ್ನು ಯಾವ ಉತ್ತಮವಾದ ಕ್ಯಾಟಲಾಗನ್ನು ನೋಡಿಯಾದರೂ ತರಿಸಿ ಕೊಡಬಹುದು.

೮. ಗ್ರಾಮೋಫೋನ್ ಮತ್ತು ರಿಕಾರ್ಡುಗಳು—ವಿನೋದವಾಗಿ ಹೊತ್ತು ಕಳಿಯಲು ೫೦೦ ರೂಪಾಯಿ ಬೆಲೆ ಬಾಳುವ ಗ್ರಾಮೋಫೋನೊಂದು; ಶೃಂಗಾರದಿಂದ ಕೂಡಿದ ಜಾವಡಿಗಳು, ಇತರ ಹಾಡುಗಳ ಪ್ಲೇಟುಗಳು ಮತ್ತು ಸೂಜಿಗಳು. ೨೦೦ ರೂಪಾಯಿನಲ್ಲಿದ್ದರೆ ಸಾಕು.

೯. ತೊಗಲಿನ ಸಾಮಾನುಗಳು --ಬೂಡ್ಸುಗಳು, ಸೂಟ್ ಕೇಸುಗಳು, (ಉಡುಪಿನ ಪೆಟ್ಟಿಗೆಗಳು), ಬ್ಯಾಗುಗಳು-ಸುಮಾರು ೫೦೦ ರೂಪಾಯಿಗಳ ಬೆಲೆ ಬಾಳುವಷ್ಟು.

೧೦. ಗೃಹಾಲಂಕಾರ ವಸ್ತುಗಳು—ಮದುವೆಯ ಸಮಯದಲ್ಲಿ ಕೊಡುವ ಚಿನ್ನ ಬೆಳ್ಳಿ ಹಿತ್ತಾಳೆಯ ಪಾತ್ರೆಗಳಲ್ಲದೆ, ಒಂದು ಡಜನ್ ಕುರ್ಚಿಗಳೂ, ಕನ್ನಡಿಯ ನಾಲ್ಕು ಬೀರುಗಳೂ, ಮೂರು ಆರಾಮ ಕುರ್ಚಿಗಳೂ (easy chairs), ಮೂರು ಸೋಫಾಗಳೂ, ಮೂರು ಮೇಜಾಗಳೂ ಇದ್ದರೆ ಸಾಕು. ಇದಲ್ಲದೆ ಗೃಹಾಲಂಕಾರಕ್ಕೆ ಯೋಗ್ಯವಾದ ಸ್ಟಾಂಡುಗಳು, ಪಟಗಳು ಮೊದಲಾದ ಇನ್ನೂ ಅನೇಕ ಸಾಮಾನುಗಳನ್ನು ತರಿಸಿ

ಕೊಳ್ಳಲು ಇತರ ಖರ್ಚುಗಳಿಗೆ ಸಂಬಂಧವಲ್ಲದೆ ಪ್ರತ್ಯೇಕವಾಗಿ ೫೦೦ ರೂಪಾಯಿಗಳನ್ನು ಕಳುಹಿಸಿದರೆ ಸಾಕು.

ಮೇಲೆ ಹೇಳಿದ ವಿಷಯಗಳೆಲ್ಲವೂ ಸರಿಯಾಗಿವೆಯೋ ಇಲ್ಲವೇ ಎನ್ನು ವುದನ್ನು ನೋಡುವುದಕ್ಕವಕಾಶವಾಗುವಂತೆ ಮದುವೆಗೆ ಒಂದು ವಾರಕ್ಕೆ ಮುಂಚೆಯೇ ಎಲ್ಲವೂ ಅಣಿಯಾಗಿದ್ದರೆ ನಾನೆಲ್ಲವನ್ನೂ ಪರಾಂಬರಿಸಿ, ಬೆಲೆ ಯಲ್ಲಿಯೂ ಯೋಗ್ಯತೆಯಲ್ಲಿಯೂ ಎಲ್ಲವೂ ಸರಿಯಾಗಿರುವುದೇ ಎಂದು ತಿಳಿಸುವೆನು. ಹೀಗೆ ಮಾಡುವುದರಿಂದ ನಿಮಗೂ ನಿಮ್ಮ ಮಗಳಿಗೂ ನನ ಗೂ ಮುಂದೆ ಉಂಟಾಗತಕ್ಕ ಮನಸ್ತಾಪವು ದೂರವಾಗಬಹುದು.

ನಿಮ್ಮ ವಿಧೇಯನಾದ

**(ಭವಿಷ್ಯ ಜಾಮಾತೃ) ಕೃಷ್ಣಸ್ವಾಮಿ,**

1st Year B. A,

Presidency College, Madras.

ರಾಮು---

ಕಿಟ್ಟೂ ಬಹಳ ಚೆನ್ನಾಗಿವೆ---ನಿನ್ನ ಪ್ರಪೋಸಲ್ಸ್! ದಯವಿಟ್ಟು ಆ ಕಾಗ ದವನ್ನು ಮಾತ್ರ ಪೋಸ್ಟ್ ಮಾಡಬೇಡ.

ಕಿಟ್ಟು---

ಅದೇಕೆ?

ರಾಮು---

ಕಿಟ್ಟೂ, ಇಷ್ಟು ಬೆಲೆಯನ್ನು ಕೊಟ್ಟು ನಿನ್ನನ್ನು ಕೊಳ್ಳಬೇಕಾಗಿದ್ದರೆ ನಿನ್ನ ಮಾವನಾಗುವನೆಷ್ಟು ಐಶ್ವರ್ಯವುಳ್ಳವನಾಗಿರಬೇಕು? ಅವನೊಬ್ಬ ಕ್ಲಾರ್ಕ್ ಎನ್ನುವುದನ್ನು ಮರತೆಯಾ? ಅಂತಹ ಹಾರುವ ಹಕ್ಕಿಯಮೇಲೆ ಬ್ರಹ್ಮಾ ಸ್ತ್ರವನ್ನು ಪ್ರಯೋಗಿಸಬೇಡ. ನಿನ್ನ ತಂದೆತಾಯಿಗಳು ವರದಕ್ಷಿಣೆಗಾಸೆ ಪಟ್ಟರೂ ಅದಕ್ಕೆ ಕೈಯೊಡ್ಡುವುದು ನಿನಗೆ ಉಚಿತವೆ?

ಕಿಟ್ಟು---

ಆಹಾ! ರಾಮೂ, ನೀನೆಂತಹ ನಿಸ್ಪೃಹನಪ್ಪಾ! 'ಈ ಕಾಲದಲ್ಲಿ ಕನ್ಯೆಯ

ರು ಕಾಸಿಗೊಂದ್ಸು, ಕೊಸರಿಗೆಡಾಗಿರುವರು'' ಇವನ ಮಗಳಿಲ್ಲದಿದ್ದರೆ ಮತ್ತೊಬ್ಬನ ಮಗಳಾಯಿತು. ಬರತಕ್ಕ ಹಣವನ್ನು ಬೇಡವೆನ್ನುವರೇ?

ರಾಮು---

ಬಡವನ ಮಗಳನ್ನು ಮದುವೆಯಾಗಿ ದೀನ ಕುಟುಂಬವನ್ನುದ್ಧರಿಸುವುದು ಭಾರತೀಯ ಯುವಕರ ಕರ್ತವ್ಯವು. ಅದನ್ನು ಬಿಟ್ಟು ಧನಪಿಶಾಚಿಯಾದರೆ ಅಂಥವನನ್ನು ಭಾರತಮಾತೆಯು ಅನುಗ್ರಹಿಸುವಳೇ? ಲಕ್ಷ್ಮಿಯು ಚಂಚಲೆಯು, ಇಂದಿದ್ದಲ್ಲಿ ನಾಳೆ ಇರಳು. ನೀನು ಈ ಹಠವನ್ನು ಬಿಡು. Please do not post this letter, I say (ಎಂದು ಕೈಹಿಡಿದು ಕೊಳ್ಳುವನು.)

ಕಿಟ್ಟು—

ರಾಮು, ನನ್ನಿಷ್ಟದಂತೆ ನಡೆಯುವ ಅಧಿಕಾರವು ನನಗೆ; ಇದನ್ನು ಕೇಳಲು ನೀನು ಯಾರು? Do not trouble me.

ರಾಮು—

ಕಿಟ್ಟು, ಈ ವರದಕ್ಷಿಣೆಯ ನಿಮಿತ್ತ ಎಷ್ಟೊಂದು ಬಡ ಸಂಸಾರಗಳು ಕಷ್ಟಪಡುತ್ತಿರುವುವೆನ್ನುವುದನ್ನು ನೀನು ಬಲ್ಲೆ. ಆದರೂ ನಿನ್ನ ಈ ಹಠವನ್ನು ನೋಡಿದರೆ ನಿನ್ನ ಮೂರ್ಖತನವೂ, ಧನಾಶೆಯೂ ಚೆನ್ನಾಗಿ ವ್ಯಕ್ತವಾಗುವುದು. ನೀನೇನಾದರೂ ಮಾಡಿಕೋ, ನಿನ್ನ ತಂಟೆಗೆ ಬರುವುದಿಲ್ಲ. (ಎಂದು ಹೊರಟುಹೋಗುವನು)

ಕಿಟ್ಟು—

Nonsense, ಮಹಾ ಬೃಹಸ್ಪತಿಯಂತೆ ನನಗೆ preach ಮಾಡಲು ಬಂದ! ನಾನೀ letterನ್ನು ಪೋಸ್ಟ್ ಮಾಡುವೆನು.

(ಹೊರಟುಹೋಗುವನು, ತೆರೆಬೀಳುವುದು)



## ನಾಲ್ಕನೆಯ ಸೀನ್.

ಮದ್ರೂರಿನಲ್ಲಿ ಮಹದೇವಯ್ಯರ ಮನೆ.

ಕೈಯಲ್ಲಿ ಎರಡು ಮೂರು ಕಾಗದಗಳನ್ನು ಹಿಡಿದುಕೊಂಡು ಮಹದೇವಯ್ಯರು ಪ್ರವೇಶಮಾಡುವರು.

ಮಹದೇ–

ಈಗಿನ ಕಾಲದ ಹುಡುಗರು ಎಂದರೆ ಹಣದಾಸೆ ಪಡುವುದಿಲ್ಲವೆಂದಿದ್ದೆ. ನೋಡಿದರೆ ನಮ್ಮ ಕಾಲವೇ ರಾಮರಾಜ್ಯವೆಂದು ಹೇಳಬೇಕಾಗಿದೆ. ಯಾರಮನೆ ಹಾಳುಮಾಡಿ ಇವನು ಕೇಳಿದ್ದನ್ನೆಲ್ಲಾ ಕೊಡುವುದು! ಲಿಸ್ಟಂತೆ, ಲಿಸ್ಟು! ಸರಿಯಾಗಿ ಹನುಮಂತನ ಬಾಲದಷ್ಟಿದೆ. ಲೇ–ಲೇ, (ಎಂದು ಕರೆಯುವನು. ಆಗತಾನೇ ಸ್ನಾನಮಾಡಿ ತಲೆಯನ್ನು ಬಟ್ಟೆಯಿಂದೊರಸಿಕೊಳ್ಳುತ್ತ ಜಾನಕಿಯು ಪ್ರವೇಶಿಸುವಳು.)

ಜಾನಕಿ—

ಏನು! ಕಾಗದ ಬಂತೇನು? ವಿಶೇಷವೇನು?

ಮಹದೇ–

ಆಹಾ! ಬೇಕಾದಹಾಗೆ ಬಂದಿದೆ. (ಕಾಗದದಲ್ಲಿ ಬರೆದಿರುವುದನ್ನೆಲ್ಲಾ ವಿವರಿಸಿ ಹೇಳುವನು) ಚೆನ್ನಾಗಿದೆ-ಚೆನ್ನಾಗಿದೆ. ಅಪ್ಪಾ, ನಮ್ಮ ಕಾಲದಲ್ಲಿ ಇಷ್ಟು ನಾಗರೀಕತೆಯೂ ಇರಲಿಲ್ಲ, ಜನರಿಗಿಷ್ಟಾಸೆಯೂ ಇರಲಿಲ್ಲ; ಈಗ ಎಲ್ಲವೂ ತಲೆಕೆಳಗಾಗಿದೆ. ಕೇಳುವರು ಯಾರು, ಹೇಳುವರು ಯಾರು? ಇವನ ಬುದ್ಧಿವಂತಿಕೆಯನ್ನೆಲ್ಲಾ ಈ ಕಾಗದ ಬರೆಯುವುದರಲ್ಲಿಯೇ ತೋರಿಸಿರುವಂತಿದೆ.

ಜಾನಕಿ—

ಇನ್ನೇನು ಬೇರೆಲ್ಲಿಯಾದರೂ ನೋಡಬೇಕಾದುದೇ!

ಮಹದೇ–

ಮಗನ ಕೈಯಿಂದ ಕಾಗದ ಬರೆಸಿ ತಾನು ಜಾರಿಕೊಂಡನಲ್ಲಾ, ಆ ತಹಶೀಲ್ದಾರನ ಬುದ್ಧಿಯನ್ನು ನೋಡು.

ಜಾನಕಿ--

ತಪ್ಪನ್ನು ಅವನ ಮೇಲೆ ಹಾಕಿ ತಾವು ತಟಸ್ಥರಾಗಿರುವುದು ಮತ್ತೆ ಹೇಗೆ? ಕೊಯಮತ್ತೂರು ಕಾಲೇಜಿನ ಹುಡುಗನನ್ನು ನೋಡಿದರಾಯಿತು.

ಮಹದೇ-

ಈಗೇನು ಮುಳುಗಿಹೋಯಿತು? ಇನ್ನೆರಡು ವರ್ಷದಮೇಲೆ ಮದುವೆ ಮಾಡಿದರಾಯಿತು. ಎಂದೋ ಸಕಲ ಅನುಕೂಲಗಳೂ ಸಿದ್ಧಿಸಿಟ್ಟ ಕಾಲ ದಲ್ಲಿ ಸೃಷ್ಟಿಸಿದ ಶಾಸ್ತ್ರಗಳನ್ನೇ ಆಧಾರವಾಗಿಟ್ಟುಕೊಂಡು ಈಗ ಎಂತಹ ಕಷ್ಟವನ್ನನುಭವಿಸಬೇಕಾಗಿದೆ? ಪೂರ್ವದಲ್ಲಿ ವಧುವಿಗೆ ವರನಾಗಬೇಕೆಂದು ಯಾರು ಹುಡುಕಿಕೊಂಡು ಹೋಗುತ್ತಿದ್ದರು ? ವಿದ್ಯಾರ್ಥಿಗಳು ತಾವೇ ಬಂದು ಕನ್ಯೆಯರನ್ನು ವರಿಸುತ್ತಿದ್ದರು. ಈಗೇನೂ ಇಲ್ಲ. ಮನೆ ಮಾರಿ, ಮಠಮಾರಿ, ಸರ್ವಸ್ವವನ್ನೂ ಮಾರಿ ಅಳಿಯದೇವತೆಗೆ ತೃಪ್ತಿಪಡಿಸಿದರೂ ಸುಖವಾದರೂ ಉಂಟೆ? ಅದು ಮೊದಲೇ ಇಲ್ಲ.

ಜಾನಕಿ-

-ನಮ್ಮಲ್ಲಿ ದುಡ್ಡಿಲ್ಲದ ಮಾತ್ರಕ್ಕೇ ಶಾಸ್ತ್ರವನ್ನೂ, ಕಾಲವನ್ನೂ ನಾವೇಕೆ ದೂಷಿಸಬೇಕು? ಕೊಡತಕ್ಕ ಪುಣ್ಯಾತ್ಮರು ಎಷ್ಟೋ ಜನರಿರುವಾಗ ತೆಗೆ ದುಕೊಳ್ಳುವರಿಗೇನು ಕಡಮೆ ? 'ಕುಣಿಯುವವನೊಬ್ಬನಿದ್ದರೆ ನೋಡುವ ವರಿಗೇನು ಕಡಮೆ ?'

ಮಹದೇ-

ಲೇ! ಸೀತಾಲಕ್ಷ್ಮಿಗೆ ಈಗಿನ್ನೂ ಮದುವೆಗೆ ಅವಸರವಿಲ್ಲ; ಸ್ವಲ್ಪ ನಿಧಾನಿಸಿ ಮಾಡೋಣ ಅವಸರವೇನು ?

ಜಾನಕಿ--

(ನಿಟ್ಟುಸಿರು ಬಿಡುತ್ತಾ) ನಮ್ಮಂತಹ ದರಿದ್ರರ ಹೊಟ್ಟೆಯಲ್ಲಿ ಹೆಣ್ಣು ಮಕ್ಕಳು ಏಕೆ ಹುಟ್ಟುತ್ತಾರೆ ! (ಎಂದುಕೊಂಡು ಹೊರಟುಹೋಗುವಳು)

ಮಹದೇ-

ಹಣವಿದ್ದರೆ ಶಾಸ್ತ್ರವಿಲ್ಲ; ಅನುಕೂಲವಿಲ್ಲದಿದ್ದರೆ ಶಾಸ್ತ್ರ' ಇಲ್ಲದಿದ್ದರೆ ಯಾ

ವುದೂ ಇಲ್ಲ. ಅಳಿಯದೇವರನ್ನು ಧನದಿಂದ ತೃಪ್ತಿಮಾಡಲಾರದ ದೋಷ ಕ್ಕಾಗಿ ಕುಂಟನಿಗೂ, ಕುರುಡನಿಗೂ ,ಮುದುಕನಿಗೂ, ಮಕ್ಕಳನ್ನು ತಮ್ಮ ಸ್ವಹಸ್ತದಿಂದ ಮನಃಪೂರ್ವಕವಾಗಿ ಧಾರೆಯೆರೆದು, ಅವರ ಕಷ್ಟವನ್ನು ನೋಡಿ ಸಹಿಸದೆ, ದಿವಾರಾತ್ರಿ ಕೊರಗುವ ಕನ್ಯಾಪಿತೃಗಳೇ ಈಗ ಎಲ್ಲೆಲ್ಲಿ ಯೂ ತುಂಬಿರುವರು. ಏನನ್ಯಾಯ ! ಎಂತಹ ದುರ್ದಶೆ! ಅನುಕೂಲ ನಾಗಿ ವರದಕ್ಷಿಣೆ ಕೇಳದ ಪುಣ್ಯಾತ್ಮನಾದ ವರನು ದೊರೆಯುವವರೆಗೂ ಸೀತಾಲಕ್ಷ್ಮಿಗೆ ಮದುವೆಯನ್ನೇ ಮಾಡುವುದಿಲ್ಲ. ಈ ನಮ್ಮ ದೇಶದಲ್ಲಿ ದೀನರಾದ ಕನ್ಯಾಪಿತೃಗಳೆಷ್ಟುಮಂದಿ ನನ್ನಂತೆ ಗೋಳಾಡುತ್ತಿಲ್ಲ? ಇರಲಿ, ದೈವಚಿತ್ತವನ್ನರಿತು ದೇವರ ಮೇಲೆ ಭಾರಹಾಕಿ ನಿಧಾನವಾಗಿ ಮದುವೆ ಮಾಡುವೆನು. ಲೋಕಾಪವಾದಕ್ಕೆ ಹೆದರಿ, ಶಾಸ್ತ್ರಕ್ಕೆ ಹೆದರಿ, ಈ ನನ್ನ ರತ್ನಪುತ್ಥಳಿಯನ್ನು ಧನಪಿಶಾಚಗ್ರಸ್ತರಿಗೆಂದೂ ಕೊಡುವುದಿಲ್ಲ. ಏನೇನಾ ಗುವುದೋ ಆಗಲಿ. ಶಾಸ್ತ್ರವಂತೆ ಶಾಸ್ತ್ರ, ಅದೆಂತಹ ಶಾಸ್ತ್ರ! ಹೀಗಾದರೂ ಮದುವೆಮಾಡದೇ ಇದ್ದರೆ ಜಾತಿಯೇ ಹೋಗುವುದಂತೆ! ಇದಕ್ಕೆ ಮಾತ್ರ ಶಾಸ್ತ್ರ; ಉಳಿದುದೊಂದಕ್ಕೂ ಶಾಸ್ತ್ರವಿಲ್ಲ. ಇದರ ಫಲವೇನಾಗುವುದೋ ನೋಡೋಣ. (ಹೊರಟುಹೋಗುವನು)

ಸೀತಾಲಕ್ಷ್ಮಿಯ ಪ್ರವೇಶ.

ಸೀತಾಲ–

(ಅಲ್ಲಿಂದಿಲ್ಲಿಗೆ ತಿರುಗುತ್ತಾ) ಇದೇನು ಮಾಯವೋ, ಏನು ವಿಚಿತ್ರವೋ! ಇಷ್ಟೊಂದು ದೊಡ್ಡ ಲಿಸ್ಟನ್ನು ಬರೆಯಲು ಆ ಹುಡುಗನಿಗೆ ಅದು ಹೇಗೆ ತೋಚಿತೋ? ನಮ್ಮಮ್ಮ ನಾಚೀರೆಕಾಣೆ, ಅವನೇನೋ ಸರಿಯಾಗಿ ಹನು ಮಂತನ ಬಾಲದಷ್ಟು ದೊಡ್ಡದಾದ ಲಿಸ್ಟನ್ನೇ ಬರೆದನಲ್ಲಾ! ಇದನ್ನು ಹೇಗೆ ಕೊಟ್ಟಾರು? ಶಕ್ತಿಯಿದೆಯೋ, ಇಲ್ಲವೇ ಎನ್ನುವ ವಿವೇಕವಾದರೂ ಇರಬೇ ಡವೇ? ಅದೇನು ಬಿ.ಎ.ಯೋ, ಅದೆಂತಹ ಎ.ಬಿ.ಯೋ ! ಪರಮಾತ್ಮನೇ ಬಲ್ಲ. ಇಲ್ಲ, ಪಾಶ್ಚಾತ್ಯ ಸಂಸ್ಕೃತಿಯ ಫಲವೋ? ಅಥವಾ ಭರತಮಾ ತೆಯ ದುಃಸ್ಥಿತಿಯೋ? ಚೆನ್ನಾಯಿತು ! ಚೆನ್ನಾಯಿತು !! ಇದೆಲ್ಲಾ ಇರ

ಲಾರದು. ನಮ್ಮಂತಹ ದರಿದ್ರ ವಧುಗಳ ದುರದೃಷ್ಟವೇ ಆಗಿರಬೇಕು. ಅಳಿಯ ಮಹಾಶಯನು ಬರೆದ ಕಾಗದವನ್ನೋದಿ, ನಮ್ಮ ತಂದೆ ಪಟ್ಟ, ಅವಸ್ಥೆಯನ್ನು ನಾನಾರೊಂದಿಗೆ ಹೇಳಿ ಗೋಳಾಡಲಿ? ಅದನ್ನು ಕಂಡೂ ಕಂಡು ನಾನು ಬಾಯ್ಮುಚ್ಚಿಕೊಂಡು ಸುಮ್ಮನೇ ಇರುವುದು ಹೇಗೆ? ನಾನಾ ವಿಧವಾದ ದುರವಸ್ಥೆಗೆ ಸಿಕ್ಕಿ ನಮ್ಮ ದೇಶವೇ ಕಣ್ಣೀರಿನಲ್ಲಿ ಕೈ ತೊಳೆಯುತ್ತಿರುವಾಗ ಅದಕ್ಕೆ ಕಿವಿಗೊಡದೆ, ಆ ಮೊರೆಯನ್ನು ಲಾಲಿಸದೆ ತಮ್ಮ ಸುಖವೇ ಹೆಚ್ಚೆಂದು ಭಾವಿಸುವ ಈ ಯುವಕರೆಂತಹ ಸ್ವಾರ್ಥ ಪರರು? ಇವರು ಎಷ್ಟು ವ್ಯಾಸಂಗಮಾಡಿ ಏನು ಫಲ, ಡಿಗ್ರಿಗಳನ್ನು ಧರಿಸಿ ಏನು ಫಲ? 'ಇಲಿಗೆ ಪ್ರಾಣಸಂಕಟ-ಬೆಕ್ಕಿಗೆ ಚೆಲ್ಲಾಟ' ಎನ್ನುವುದು ಇವರಿಗೆ ಸರಿಯಾಗಿದೆ. (ರೋಷಾವೇಶದಿಂದ) ಭರತಭೂಮಿಯಲ್ಲಿ ಜನ್ಮವೆತ್ತಿದ ಭಾರತ ವೀರಯುವಕರೇ! ದೀನರಾದ ನಮ್ಮ ತಂದೆಯಂತಹ ಕನ್ಯಾಪಿತೃಗಳ ದುರವಸ್ಥೆಯನ್ನು ನೋಡಿ ನೋಡಿ ಅವರನ್ನು ಹಿಂಸಿಸಲು ನಿಮ್ಮ ಮನಸ್ಸು ಹೇಗೆ ಒಡಂಬಡುವುದು? ನಿಮ್ಮ ಜ್ಞಾನಾರ್ಜನೆಗಾಗಿ ಖರ್ಚು ಮಾಡಿದ ದ್ರವ್ಯವನ್ನು ನಿಮ್ಮ ದೇಹವಿಕ್ರಯದಿಂದ ಗಳಿಸುವುದು ಪಾಪವಲ್ಲವೇ? ಒಂದುಕಡೆ ದೇಶದ ದುರವಸ್ಥೆ; ಮತ್ತೊಂದು ಕಡೆ ಕನ್ಯೆಯರ ದುರವಸ್ಥೆ. ಇವುಗಳಿಂದ ನಿಮ್ಮ ಮನಸ್ಸು ಕರಗಲಿಲ್ಲವೇ? ಅನ್ಯದೇಶದಲ್ಲಿ ಯುದ್ಧ ಒದಗಿತೆಂದೂ, ಮತ್ತೊಂದು ದೇಶದಲ್ಲಿ ಜಲಪ್ರಳಯವಾಯಿತೆಂದೂ, ಇನ್ನೊಂದು ಕಡೆ ಅಗ್ನಿ ಅನಾಹುತವಾಯಿತೆಂದೂ, ಕ್ಷಾಮ ಪ್ರಾಪ್ತವಾಯಿತೆಂದೂ ಅಲ್ಲಿನವರಿಗೆ ಸಹಾಯಮಾಡಲು ಸೊಂಟಗಟ್ಟಿ ನಿಲ್ಲುವಿರಿ; ಸ್ವರಾಜ್ಯ ಬೇಕೆಂದು ಹೋರಾಡಿ ಕಾರಾಗೃಹಕ್ಕೆ ತೆರಳುವಿರಿ. ಇಂತಹ ವಿಷಯಗಳಿಗೆ ಗಮನಕೊಡುವ ನೀವು ನಿಮ್ಮ ಸೋದರಿಯರ ದುರವಸ್ಥೆಗೆ ಕಿವಿಗೊಡಬಾರದೇ? ಭಾರತೀಯ ಯುವಕರೇ, ಪ್ರಾಚೀನಾರ್ಯರ, ಪ್ರಾಚೀನ ಮಹರ್ಷಿಗಳ ಪವಿತ್ರ ರಕ್ತವು ನಿಮ್ಮ ಧಮನಿಗಳಲ್ಲಿ ಹರಿಯುತ್ತಿಲ್ಲವೇ? ವೀರಯುವಕರೇ! ನಮ್ಮ ದೇಶದವರ ದುಃಖವನ್ನೂ, ದುರ್ಗತಿಯನ್ನೂ, ದುರವಸ್ಥೆಯನ್ನೂ, ಪರಿಹರಿಸದೆ ನೀವು ಸಹಸ್ರ ಸ್ವರಾಜ್ಯ

ಸ್ವಾತಂತ್ರ್ಯಗಳನ್ನು ಹೊಂದಿ ಫಲವೇನು? ಎಷ್ಟೆಷ್ಟೋ ಸುಧಾರಣೆಗಳನ್ನು ಮಾಡಿ ಪ್ರಯೋಜನವೇನು ? ಸಭೆಯಲ್ಲಿ ನಿಂತು ವೀರಾವೇಶದಿಂದ ಉಪನ್ಯಾಸಗಳನ್ನು ಮಾಡಿ ಪ್ರಯೋಜನವೇನು ? ತಾಯಿಯ ದುಃಖವನ್ನು ನೀಗಿಸದೆ ಮಲತಾಯಿಯ ಕಣ್ಣೊರೆಸುವುದು ನ್ಯಾಯವೇ ? ಷಟ್ಚಕ್ರವರ್ತಿಗಳ ವೀರರಕ್ತವು ನಿಮ್ಮಲ್ಲಿ ಹರಿಯುತ್ತಿಲ್ಲವೇ? ಛೀ! ಛೀ! ಇದೆಂತಹ ಲಜ್ಜಾಸ್ಪದವು ! ಕನ್ಯೆಯರ ಕೊರಳಿಗೆ ಮಂಗಳಸೂತ್ರವನ್ನು ಕಟ್ಟಲು ನಿಮಗೆ ಕೂಲಿಬೇಕೇ? ಈ ವಿಷಯವು ನಿಮಗೆ ಲಜ್ಜೆಯನ್ನುಂಟುಮಾಡುವುದಿಲ್ಲವೇ ? ನೀವು ಭರತಖಂಡದಲ್ಲಿ ಜನ್ಮವೆತ್ತಿದುದು ನಿಶ್ಚಯವಾದರೆ, ಪ್ರಾಚೀನಾರ್ಯರ ಋಷಿಗಳ ಪವಿತ್ರರಕ್ತವು ನಿಮ್ಮ ದೇಹದಲ್ಲಿ ಹರಿಯುತ್ತಿರುವುದು ನಿಶ್ಚಯವಾದರೆ, ದೇಶಭಕ್ತಿಯು ನಿಮಗಿರುವುದು ನಿಶ್ಚಯವಾದರೆ, ನಮ್ಮಂತಹ ಕನ್ಯೆಯರ ಮೊರೆಯನ್ನು ಲಾಲಿಸಿ, ಸಂಕಟವನ್ನು ಪರಿಹರಿಸಿ, ಕನ್ಯೆಯರ ವಿವಾಹವೆಂದ ಮಾತ್ರದಲ್ಲಿ ಸಾಂಕ್ರಾಮಿಕ ಜಾಡ್ಯವನ್ನು ಕಂಡಂಜುವಂತೆ ಕನ್ಯಾಪಿತೃಗಳು ಅಂಜುವುದನ್ನು ತಪ್ಪಿಸುವ ಶಕ್ತಿಯು ನಿಮ್ಮಲ್ಲಿಲ್ಲವೇ? ವರದಕ್ಷಿಣೆಯನ್ನು ತಂದೆಯು ಕೊಡಲಾರನೆಂಬುದಕ್ಕಾಗಿ ಸ್ನೇಹಲತೆಯು ಅಗ್ನಿಗಾಹುತಿಯಾದಳು, ಸರಳಬಾಲೆಯೂ ಅಗ್ನಿಗಾಹುತಿಯಾದಳು. ಅವಳ ಆದೇಶವೇನಾಯಿತು? ಅವಳ ಆತ್ಮ ಸಮರ್ಪಣೆಯಿಂದೇನಾಯಿತು ? ಅವರುಗಳಂತೆ ನಾನು ಪ್ರಾಣತ್ಯಾಗ ಮಾಡೆನು. ವಿವಾಹಕ್ಕೊದಗಿರುವ ಸಂಕಟವನ್ನು ದೂರಮಾಡಲು ಇಂದಿನ ಯುವಕರು ಬದ್ಧಕಂಕಣರಾಗುವವರೆಗೂ ನಾನು ವಿವಾಹವಾಗುವುದಿಲ್ಲ. ನನ್ನ ಬಡ ಮಾತಾಪಿತೃಗಳಂತೆಯೇ ಇನ್ನೂ ಲಕ್ಷೋಪಲಕ್ಷ ಬಡವರಾದ ಕನ್ಯಾಪಿತರುಗಳ ದುಃಖನಿವಾರಣೆಯಾಗುವವರೆಗೂ ನಾನು ಕನ್ನಿಕೆಯಾಗಿಯೇ ಇರುವೆನು. [ಕೈಜೋಡಿಸಿ ಮೊಣಕಾಲೂರಿ ಕುಳಿತು] ದೇವೀ! ನಮ್ಮ ದೇಶಕ್ಕೊದಗಿರುವ ಈ ದುರವಸ್ಥೆಯನ್ನು ತೊಲಗಿಸು. ಭಾರತ ಯುವಕರ ಹೃದಯಕಮಲವನ್ನು ಪ್ರವೇಶಿಸಿ ಅವರ ಮನಸ್ಸನ್ನಾವರಿಸಿರುವ ಈ ದುರ್ಯೋಚನೆಯನ್ನು ತೊಲಗಿಸು. ಎಷ್ಟೋ ಕ್ರೂರರಕ್ಕಸರನ್ನು ಸದೆಬಡಿದು

ಭೂಭಾರವನ್ನಿಳಿಸಿದ ನಿನಗೆ ಈ ಕಾರ್ಯವು ಕಷ್ಟವೇ ಪರಮಾತ್ಮಾ, ಅನುಗ್ರಹಿಸು; ಪ್ರತಿ ನಿಮಿಷದಲ್ಲಿಯೂ ನಾನು ನಿನ್ನನ್ನು ಕೇಳಿಕೊಳ್ಳುವುದು ಇದೊಂದು ವರವೇ! ನನ್ನ ದೀಕ್ಷೆಯು ಸಾರ್ಥಕವಾಗುವಂತೆ ಅನುಗ್ರಹಿಸು. ಪರಮಾತ್ಮಾ, ಸಕಲರ ಅಂತರಂಗದಲ್ಲಿಯೂ ನೆಲಸಿರುವ ಸರ್ವಾಂತರ್ಯಾಮಿಯೇ, ನನ್ನ ಮೊರೆಗೆ ಕಿವಿಗೊಡು; ನಾನು ಬೇಡುವೆನು. ನನ್ನೀ ಮೊರೆಯು ಸಮಸ್ತ ಭಾರತವೀರ ಹೃದಯದಲ್ಲಿಯೂ ವ್ಯಾಪಿಸಲಿ.

|| ಶ್ರೀರಾಗ-ರೂಪಕತಾಳ ||

ಬೇಡುವೆ | ಶ್ರೀಹರಿಯೇ | ಮುರಾರೇ || ಬೇಡುವೆ | ಶ್ರೀಹರಿಯೇ ||

ಬೇಡುವೆನೆಂದಿಗೂ | ಬೇಡ ಸ್ತ್ರೀಜನ್ಮವು |
ಎನ್ನದೀಕ್ಷೆಯ ಸಲಿಸೂ | ಮುರಾರೇ | ಬೇಡುವೆ ಶ್ರೀಹರಿಯೆ ||೧||

ಭಾರತ ವೀರಯುವಕರ ಹಠವನು |
ಪರಿಹರಿಸಿ ನೀಕಾಯೌ ಮುರಾರೇ | ಬೇಡುವೆ ಶ್ರೀಹರಿಯೇ ||೨||

ಎನ್ನಯ ದೀಕ್ಷೆಯು | ಸಾರ್ಥಕಪೊಂದಲು |
ದೇವಾಸೀನನುಗ್ರಹಿಸು | ಮುರಾರೇ | ಬೇಡುವೆ ಶ್ರೀಹರಿಯೇ ||೩||

[ತೆರೆ ಬೀಳುವುದು ಸಂಪೂರ್ಣಂ]

———:o:———

**ಸರಸ್ವತಿಗೆ ಚಂದಾದಾರರಾಗಿ ನಿಮ್ಮ ಪತ್ನಿ-ಪುತ್ರಿ-ಭಗಿನೀ ಮೊದಲಾದ ಸ್ತ್ರೀ ಸಂಸಾರಕ್ಕೆ ಶಾಂತಿಯನ್ನೂ, ಸಂತುಷ್ಟಿಯನ್ನೂ ತಂದುಕೊಡಿರಿ**

ಇಡೀ ಕರ್ನಾಟಕದಲ್ಲಿ ಮಹಿಳೆಯರ ಉನ್ನತಿಗಾಗಿ ಹೊರಡುವ ಸಚಿತ್ರ ಮಾಸಪತ್ರಿಕೆಯು ಸರಸ್ವತಿಯೊಂದೇ.

ಭರತಖಂಡದ ಪ್ರಖ್ಯಾತ ಮಹಿಳೆಯರ ಪರಿಚಯವನ್ನು ಸಾಧ್ಯವಾದ ಮಟ್ಟಿಗೆ ಜೀವನಚರಿತೆ ಮತ್ತು ಭಾವಚಿತ್ರಗಳೊಡನೆ ಮಾಡಿಕೊಡಲಾಗುವುದು.

ಚಿಕ್ಕಚಿಕ್ಕ ಕಥೆಗಳೂ, ಕವಿತೆಗಳೂ, ಗೃಹವಿಜ್ಞಾನ ಮತ್ತು ಗೃಹವೈದ್ಯ, ಸ್ತ್ರೀಸಂಸಾರ, ಹೊಲಿಗೆ, ಸಂಗೀತ, ಪಾಕಶಾಸ್ತ್ರ, ಸಣ್ಣ ಸಣ್ಣ ನಾಟಕಗಳು, ಪ್ರಪಂಚದ ಪ್ರಚಲಿತ ವಿಷಯಗಳು, ಸ್ತ್ರೀಯರ ಆರೋಗ್ಯ ಸಂಬಂಧವಾದ ಲೇಖನಗಳು ಪ್ರತಿತಿಂಗಳಲ್ಲಿಯೂ ಪ್ರಕಟಿಸಲ್ಪಡುವುವು.

ಈ ವರ್ಷದಿಂದ "ಮಕ್ಕಳ ಪುಟಗಳು" ಎಂಬ ಹೆಚ್ಚಿನ ವಿಷಯವು ಪ್ರಕಟಿಸಲ್ಪಡುತ್ತಿದೆ.

ಸರಸ್ವತಿಗೆ ಚಂದಾದಾರರಾಗತಕ್ಕವರಿಗೆ ಮೊದಲು ಒಂದು ಹಳೆಯ ಸಂಚಿಕೆಯನ್ನು ವಿ. ಪಿ. ಯ ಮೂಲಕ ಕಳುಹಿಸಿ, ವಿ. ಪಿ. ಯು ಸ್ವೀಕೃತವಾದನಂತರ ಆ ಸಂಪುಟದ ಮೊದಲನೆಯ ಸಂಚಿಕೆಯಿಂದ ಎಲ್ಲ ಸಂಚಿಕೆಗಳನ್ನೂ ಕಳುಹಿಸುವೆವು.

ಸರಸ್ವತಿಯು ಇಡೀ ಕರ್ನಾಟಕದಲ್ಲಿ ಪ್ರಚಾರದಲ್ಲಿರುವುದರಿಂದ ಪ್ರಕಟನೆಗೆ ಬಹಳ ಉತ್ತಮವಾದದ್ದಾಗಿದೆ.

ಮೈಸೂರು ಸರ್ಕಾರದ ವಿದ್ಯಾಭ್ಯಾಸದ ಇಲಾಖೆಯವರಿಂದ ಸರ್ಕಾರದ ವಾಚನಾಲಯಗಳಿಗೂ, ಶಾಲೆಯ ತರಗತಿಗಳಿಗೂ ಮುಂಜೂರಾಗಿರುವ ಪತ್ರಿಕೆ.

ಒಂದು ವರ್ಷದ ಚಂದಾ...... ೩—೦—೦.

ಎರಡು ವರ್ಷಕ್ಕೆ ಒಟ್ಟಿಗೆ ಚಂದಾದಾರರಾಗತಕ್ಕವರಿಗೆ...... ೫—೦—೦.

**ಟಪಾಲು ಹಾಸಲು ಪ್ರತ್ಯೇಕ**

**ವಿಳಾಸ—ಸರಸ್ವತೀ ಕಾರ್ಯಾಲಯ,**

**ಚಾಮರಾಜಪೇಟೆ, ಬೆಂಗಳೂರು ಸಿಟಿ.**

## ಶಾರದಾ ಗ್ರಂಥಮಾಲೆಯ ಪ್ರಕಟನೆಗಳು.



| | |
|---|---|
| ಸತೀ ಪದ್ಮಿನಿ .... .... .... | ೧-೦-೦ |
| ಸಂಕಲನ .... .... .... | ೦-೮-೦ |
| ಇಂದಿರೆ .... .... .... | ೦-೧೨-೦ |
| ಷಹಜಹಾನ್ .... .... .... | ೦-೧೨-೦ |
| ರಣಕೇಸರಿ ಅಥವಾ ರಾಜಭಕ್ತಿ .... .... | ೦-೧೪-೦ |
| ಇಪ್ಪತ್ತನೆಯ ಶತಮಾನದ ಅಳಿಯ .... .... | ೦-೨-೦ |
| ಬ್ಯಾರಿಸ್ಟರ್ ರಾಮಚಂದ್ರ .... .... | ೦-೪-೦ |
| ಸುಖಲತೆ .... .... .... | ೦-೧೦-೦ |

ವಿಳಾಸ:—ಸರಸ್ವತೀ ಕಾರ್ಯಾಲಯ,
**ಚಾಮರಾಜಪೇಟೆ, ಬೆಂಗಳೂರು ಸಿಟಿ.**